# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1270 |
| ಸದಸ್ಯರ ಹೆಸರು | : | ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 24-12-2021. |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಸ್ಥಳೀಯ ಸರ್ಕಾರಗಳೆಂಬ ಹೆಗ್ಗಳಿಕೆ ಇರುವ ಗ್ರಾಮ ಪಂಚಾಯತ್‌ಗಳು ಮೂಲತವಾಗಿ ನಿರ್ವಹಿಸಬೇಕಾಗಿರುವ ಜವಾಬ್ದಾರಿಗಳು ಯಾವುವು; ಕಳೆದ 2 ವರ್ಷಗಳಲ್ಲಿ ರಾಜ್ಯದಲ್ಲಿನ ಈ ಪಂಚಾಯತ್‌ಗಳಿಗೆ ಯಾವುದೇ ಅಭಿವೃದ್ಧಿ ಅನುದಾನ ಬಿಡುಗಡೆಯಾಗದೇ ಆರ್ಥಿಕ ಪರಿಸ್ಥಿತಿ ಕುಸಿದು ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಹಾಗಿದ್ದಲ್ಲಿ, ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 58 ರಲ್ಲಿ ಗ್ರಾಮ ಪಂಚಾಯತಿ ಕಡ್ಡಾಯ ಪ್ರಕಾರ್ಯಗಳ/ಜವಾಬ್ದಾರಿಗಳ ಬಗ್ಗೆ ವಿವರಿಸಲಾಗಿದೆ. ಅವು ಈ ಕೆಳಕಂಡಂತಿವೆ.<br>1) ಪ್ರಾಥಮಿಕ ಶಾಲೆಗೆ ಮಕ್ಕಳ ಸಾರ್ವತ್ರಿಕ ದಾಖಲಾತಿಯನ್ನು ಖಚಿತಪಡಿಸಿಕೊಳ್ಳುವುದು.<br>2) ಮಕ್ಕಳಿಗೆ ಸಾರ್ವತ್ರಿಕವಾಗಿ ರೋಗ ನಿರೋಧಕ ಚುಚ್ಚುಮದ್ದು ನೀಡುವ ಕಾರ್ಯಕ್ರಮಗಳನ್ನು ಸಾಧಿಸುವುದು.<br>3) ನೈರ್ಮಲ್ಯ ವ್ಯವಸ್ಥೆ ಮತ್ತು ಸರಿಯಾದ ಚರಂಡಿ ವ್ಯವಸ್ಥೆಯನ್ನು ಒದಗಿಸುವುದು.<br>4) ಸಾಕಷ್ಟು ರಸ್ತೆ ದೀಪಗಳನ್ನು ಒದಗಿಸುವುದು ಮತ್ತು ವಿದ್ಯುತ್ ಶುಲ್ಕಗಳನ್ನು ನಿಯತವಾಗಿ ಸಂದಾಯ ಮಾಡುವುದು.<br>5) ಗ್ರಾಮ ಪಂಚಾಯತಿಗಳಲ್ಲಿ ನಿಯತವಾಗಿರುವ ಎಲ್ಲಾ ಸಮುದಾಯ ಆಸ್ತಿಗಳನ್ನು ನಿರ್ವಹಿಸುವುದು.<br>6) ಪ್ರಕರಣ 58-ಎ ರಲ್ಲಿ ಜೀತಗಾರಿಕೆ ಪದ್ಧತಿ ಸಂಬಂಧದಲ್ಲಿ ವರದಿ ಸಲ್ಲಿಸುವುದು,<br>7) ಪ್ರಕರಣ 58-ಬಿ ರಲ್ಲಿ ಮಾನವ ಘನತೆಗೆ ಕಳಂಕ ತರುವ ಪಾರಂಪರಿಕ, ಸಾಮಾಜಿಕ ಮತ್ತು ಧಾರ್ಮಿಕ ಪದ್ದತಿಗಳನ್ನು ಪ್ರತಿಬಂಧಿಸುವುದು.<br>8) ಪ್ರಕರಣ 58-ಸಿ ರಲ್ಲಿ ಮಹಿಳೆಯರಿಗೆ ಲೈಂಗಿಕ ಕಿರುಕುಳ ಆಗದಂತೆ ತಡೆಗಟ್ಟುವುದು,<br>9) ಪ್ರಕರಣ 58-ಡಿ ರಲ್ಲಿ ಕಂದಾಯ ಭೂಮಿಯನ್ನು ಹೊರತುಪಡಿಸಿ ಒತ್ತುವರಿ ಮಾಡಿಕೊಂಡಿರುವ ಗ್ರಾಮ ಪಂಚಾಯತಿಯ ಸ್ವತ್ತನ್ನು ಪುನಃ ಸ್ವಾಧೀನ ಪಡೆಯುವುದು.<br>10) ಪ್ರಕರಣ 58-ಇ ರಡಿ ಸ್ವಚ್ಛ ಪರಿಸರವನ್ನು ಕಾಪಾಡುವುದು.<br>11) ಅಪಾಯಕಾರಿ ಕಲ್ಲು ಗಣಿಗಾರಿಕೆ, ಕೊಳವೆ ಬಾವಿಗಳನ್ನು, ತೆರೆದ ಬಾವಿಗಳನ್ನು ತೋಡುವುದು ಮತ್ತು ಹೊಂಡಗಳನ್ನು ನಿರ್ಮಿಸುವುದುನ್ನು ತಡೆಗಟ್ಟುವುದು.<br>12) ಅನುಸೂಚಿ-1 ರಲ್ಲಿನ ಕಾರ್ಯಗಳನ್ನು ನಿರ್ವಹಿಸುವುದು.<br><br>ಕಳೆದ 2 ವರ್ಷಗಳಲ್ಲಿ ರಾಜ್ಯದಲ್ಲಿನ ಈ ಪಂಚಾಯತ್‌ಗಳಿಗೆ ಯಾವುದೇ ಅಭಿವೃದ್ಧಿ ಅನುದಾನ ಬಿಡುಗಡೆಯಾಗದೇ ಆರ್ಥಿಕ ಪರಿಸ್ಥಿತಿ ಕುಸಿದು ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| (ಆ) | ರಾಜ್ಯದಲ್ಲಿ ಗ್ರಾಮ ಪಂಚಾಯತ್‌ಗಳ ವಿವಿಧ ಮೂಲಗಳಿಂದ ಬರುವ ಸರಾಸರಿ ಆದಾಯ ಎಷ್ಟು, ರಾಜ್ಯ ಮತ್ತು ಕೇಂದ್ರ ಸರ್ಕಾರದಿಂದ ವಿವಿಧ ಯೋಜನೆ ಅಡಿಯಲ್ಲಿ ಪ್ರತಿ ವರ್ಷ ವಿವಿಧ ಬಾಬ್ತುಗಳಿಗೆ ಸರಾಸರಿ ಅನುದಾನ ಎಷ್ಟು; | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 199 ರಂತೆ ಗ್ರಾಮ ಪಂಚಾಯತಿಗಳು ಭೂಮಿ ಮತ್ತು ಕಟ್ಟಡಗಳು, ನೀರು, ಮೊಬೈಲ್ ಟವರ್‌ಗಳು, ವಿಂಡ್‌ಮಿಲ್‌ಗಳು ಮತ್ತು ಸೋಲಾರ್ ಪಾರ್ಕ್‌ಗಳ ಮೇಲೆ ತೆರಿಗೆ ವಿಧಿಸಬಹುದಾಗಿರುತ್ತದೆ. ಇವುಗಳು |

ಜಿಲ್ಲಾವಾರು ವಿವರ ನೀಡುವುದು;

ಗ್ರಾಮ ಪಂಚಾಯತಿಗಳ ಆದಾಯ ಮೂಲಗಳಾಗಿರುತ್ತವೆ.

2019-20 ಮತ್ತು 2020-21 ನೇ ಸಾಲಿಗಾಗಿ ರಾಜ್ಯದಲ್ಲಿನ ಗ್ರಾಮ ಪಂಚಾಯತಿಗಳಿಂದ ಶೇಕಡ 100 ರಷ್ಟು ಆಸ್ತಿ ತೆರಿಗೆ ಮೊತ್ತ ಸಂಗ್ರಹಿಸುವ ಗುರಿ ಹೊಂದಲಾಗಿತ್ತು.

2019-20ನೇ ಸಾಲಿನಲ್ಲಿ ಪ್ರಸಕ್ತ ಸಾಲಿನ ಬೇಡಿಕೆಗನುಗುಣವಾಗಿ ಶೇ.96 ರಷ್ಟು ತೆರಿಗೆಯನ್ನು ಗ್ರಾಮ ಪಂಚಾಯತಿಗಳು ವಸೂಲಿ ಮಾಡಿರುತ್ತವೆ.

ಕೋವಿಡ್-19 ಲಾಕ್‌ಡೌನ್‌ನಿಂದಾಗಿ 2020-21ನೇ ಸಾಲಿನಲ್ಲಿ ಪ್ರಸಕ್ತ ಸಾಲಿನ ಬೇಡಿಕೆಗನುಗುಣವಾಗಿ ಶೇ. 88 ರಷ್ಟು ತೆರಿಗೆಯನ್ನು ಗ್ರಾಮ ಪಂಚಾಯತಿಗಳು ವಸೂಲಿ ಮಾಡಿರುತ್ತವೆ.

ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ಗ್ರಾಮ ಪಂಚಾಯತಿಗಳಿಗೆ ವಾರ್ಷಿಕವಾಗಿ ಸಿಗುವ ಅನುದಾನದ ವಿವರ ಈ ಕೆಳಕಂಡಂತಿದೆ.

| ಕ್ರ.ಸಂ | ಯೋಜನೆ / ಕಾರ್ಯಕ್ರಮ | ಅನುದಾನದ ಮೊತ್ತ |
|---|---|---|
| 1 | ಶಾಸನಬದ್ಧ ಅನುದಾನ | ರೂ.10-12 ಲಕ್ಷಗಳು. |
| 2 | 15ನೇ ಹಣಕಾಸು ಆಯೋಗದ ಅನುದಾನ | ಜನ ಸಂಖ್ಯೆ ಮತ್ತು ಭೌಗೋಳಿಕ ಪ್ರದೇಶದ ಆಧಾರದ ಮೇಲೆ ರೂ. 20-30 ಲಕ್ಷಗಳು. |
| 3 | ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ | ಪ್ರತಿ ಗ್ರಾಮ ಪಂಚಾಯಿತಿಯಲ್ಲಿನ ಕಾರ್ಮಿಕ ಆಯವ್ಯಯ ಆಧರಿಸಿ ಅನುದಾನ ನೀಡಲಾಗುತ್ತಿದೆ. |
| 4 | ಸ್ವಚ್ಛ ಭಾರತ್ ಮಿಷನ್ | ಶೌಚಾಲಯ ನಿರ್ಮಿಸಿಕೊಳ್ಳಲು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಫಲಾನುಭವಿಗೆ ರೂ.15,000/- ಮತ್ತು ಸಾಮಾನ್ಯ ಫಲಾನುಭವಿಗೆ ರೂ.12,000/-ಗಳು. |
| 5 | ಮುಖ್ಯ ಮಂತ್ರಿ ಗ್ರಾಮ ವಿಕಾಸ ಯೋಜನೆ | ಆಯ್ಕೆಯಾದ ಗ್ರಾಮ ಒಂದಕ್ಕೆ ಒಂದು ಕೋಟಿ ರೂಪಾಯಿಗಳು. |

ರಾಜ್ಯದ ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡಿರುವ ಶಾಸನಬದ್ಧ ಅನುದಾನ ವಿವರವನ್ನು ಅನುಬಂಧ-1ರಲ್ಲಿ ಮತ್ತು 14ನೇ ಹಣಕಾಸು ಮತ್ತು 15ನೇ ಹಣಕಾಸು ಯೋಜನೆಯಡಿ ಬಿಡುಗಡೆ ಮಾಡಿರುವ ಜಿಲ್ಲಾವಾರು ವಿವರವನ್ನು ಅನುಬಂಧ-2 ರಲ್ಲಿ ನೀಡಿದೆ.

ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಅನುದಾನ ಬಿಡುಗಡೆ ವಿವರ ಈ ಕೆಳಕಂಡಂತಿದೆ.

(ರೂ. ಕೋಟಿಗಳಲ್ಲಿ)

| ವರ್ಷ | ಅನುದಾನ ಬಿಡುಗಡೆ |
|---|---|
| 2018–19 | 3047.19 |
| 2019–20 | 5546.20 |
| 2020–21 | 5605.06 |

(ಇ) ಕೇಂದ್ರ ಸರ್ಕಾರದ 15ನೇ ಹಣಕಾಸು ಯೋಜನೆ ಅಡಿ ಮತ್ತು ರಾಜ್ಯ ಸರ್ಕಾರದ 5ನೇ ಹಣಕಾಸು ಯೋಜನೆ ಅಡಿ ಕಳೆದ 2 ವರ್ಷಗಳಲ್ಲಿ ಸರಾಸರಿ ಬಿಡುಗಡೆಯಾದ ಅನುದಾನಗಳು ಎಷ್ಟು; ಈ ಅನುದಾನಗಳನ್ನು ಯಾವ ಯಾವ ಕಾರ್ಯಕ್ರಮಗಳಿಗೆ ಬಿಡುಗಡೆ ಮಾಡಲಾಗಿದೆ. ಹೀಗೆ ಬಿಡುಗಡೆಯಾದ ಅಭಿವೃದ್ಧಿ ಅನುದಾನದಲ್ಲಿ ರಾಜ್ಯ ಸರ್ಕಾರ ಪಂಚಾಯತ್‌ಗಳಿಂದ ಜಲ ಜೀವನ ಮಿಷನ್ ಮತ್ತು ಇತರೆ ಯೋಜನೆಗಳ ಅಡಿ ವಾಪಸ್ ಪಡೆದಿರುವ ಅನುದಾನ ಎಷ್ಟು; (ಜಿಲ್ಲಾವಾರು ವಿವರ ನೀಡುವುದು)

2020–21ನೇ ಸಾಲಿನಲ್ಲಿ 15ನೇ ಹಣಕಾಸು ಆಯೋಗದ ಅನುದಾನದಲ್ಲಿ ಶೇ.50 ರಷ್ಟು ಅನುದಾನವನ್ನು ಮೂಲ ಅನುದಾನವಾಗಿ ಹಾಗೂ ಶೇ.50 ರಷ್ಟು ಅನುದಾನವನ್ನು ನಿರ್ಬಂಧಿತ ಅನುದಾನವಾಗಿ ನಿಗಧಿಪಡಿಸಲಾಗಿದೆ.

2021–22 ನೇ ಸಾಲಿನಲ್ಲಿ 15ನೇ ಹಣಕಾಸು ಆಯೋಗದ ಅನುದಾನದಲ್ಲಿ ಶೇ.40 ರಷ್ಟು ಅನುದಾನವನ್ನು ಮೂಲ ಅನುದಾನವಾಗಿ ಹಾಗೂ ಶೇ.60 ರಷ್ಟು ಅನುದಾನವನ್ನು ನಿರ್ಬಂಧಿತ ಅನುದಾನವಾಗಿ ನಿಗಧಿಪಡಿಸಲಾಗಿದೆ.

2021–22 ನೇ ಸಾಲಿನಲ್ಲಿ 15ನೇ ಹಣಕಾಸು ಆಯೋಗ ಅನುದಾನಡಿ ನಿಗಧಿಪಡಿಸಲಾದ ಅನುದಾನದ ಜಿಲ್ಲಾವಾರು ವಿವರವನ್ನು ಅನುಬಂಧ–3 ರಲ್ಲಿ ಲಗತ್ತಿಸಿದೆ.

2019–20 ಮತ್ತು 2021–21 ನೇ ಸಾಲುಗಳಲ್ಲಿ 15ನೇ ಹಣಕಾಸು ಆಯೋಗದಡಿ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಬಿಡುಗಡೆಗೊಳಿಸಲಾದ ಅನುದಾನವನ್ನು ಬಳಸುವ ಕಾರ್ಯಕ್ರಮಗಳ ವಿವರವನ್ನು ಅನುಬಂಧ–4ರಲ್ಲಿ ಲಗತ್ತಿಸಿದೆ.

15ನೇ ಹಣಕಾಸು ಯೋಜನೆಯಡಿ ಗ್ರಾಮ ಪಂಚಾಯತಿಗಳಿಂದ ಜಲ ಜೀವನ ಮಿಷನ್‌ಯಡಿ ಯಾವುದೇ ಅನುದಾನವನ್ನು ಹಿಂಪಡೆದಿರುವುದಿಲ್ಲ.

(ಈ) ಹಣಕಾಸು ಆಯೋಗಗಳಿಂದ ದೊರೆತ ಅನುದಾನವನ್ನು ರಾಜ್ಯ ಸರ್ಕಾರ ವಾಪಸ್ ಪಡೆದ ನಂತರ ಗ್ರಾಮ ಪಂಚಾಯತ್‌ನಲ್ಲಿ ಕುಡಿಯುವ ನೀರಿನ ಕೊಳವೆ ಬಾವಿ, ದೀಪ ಮತ್ತು ಕಛೇರಿಗಳ ವಿದ್ಯುತ್ ಶುಲ್ಕ ಪಾವತಿಗಾಗಿ ಇರುವ ಎಸ್ಕ್ರೊ ಖಾತೆಗೆ 2021–22ನೇ ಸಾಲಿನ ಅನುದಾನ ಬಿಡುಗಡೆಯಾಗಿದೆ ಇರುವುದು ಮತ್ತು ಪಂಚಾಯತ್‌ಗಳು ಸಿಬ್ಬಂದಿಗೆ ವೇತನ ನೀಡದೆ ಇರುವುದು ನಿಜವೇ; (ಹಾಗಿದ್ದಲ್ಲಿ, ಸಂಪೂರ್ಣ ಮಾಹಿತಿ ನೀಡುವುದು)

15ನೇ ಹಣಕಾಸು ಯೋಜನೆಯಡಿ ಗ್ರಾಮ ಪಂಚಾಯತಿಗಳಿಂದ ಜಲ ಜೀವನ ಮಿಷನ್‌ಯಡಿ ಯಾವುದೇ ಅನುದಾನವನ್ನು ಹಿಂಪಡೆದಿರುವುದಿಲ್ಲ.

2021–22ನೇ ಸಾಲಿನ ಆಯವ್ಯಯದಲ್ಲಿ ಗ್ರಾಮ ಪಂಚಾಯತಿಗಳ ವಿದ್ಯುತ್ ಬಿಲ್ ಮೊತ್ತ ಪಾವತಿಸಲು ರೂ.391,79,40,000/– ಗಳ ಅನುದಾನ ಹಂಚಿಕೆ ಮಾಡಿದ್ದು, 4 ತ್ರೈಮಾಸಿಕ ಕಂತುಗಳಲ್ಲಿ ಬಿಡುಗಡೆ ಮಾಡಲು ಉದ್ದೇಶಿಸಲಾಗಿದ್ದು, ಅದರಲ್ಲಿ ಡಿಸೆಂಬರ್ 2021 ರ ಅಂತ್ಯದವರೆಗೆ ಗ್ರಾಮ ಪಂಚಾಯತಿಗಳ ವಿದ್ಯುತ್ ಬಿಲ್ ಪಾವತಿಗಾಗಿ 3 ತ್ರೈಮಾಸಿಕ ಕಂತುಗಳಲ್ಲಿ ರೂ. 295,60,87,211/– ಗಳನ್ನು ಬಿಡುಗಡೆ ಮಾಡಲಾಗಿದೆ.

ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 113 ರಂತೆ ಗ್ರಾಮ ಪಂಚಾಯತಿಯ ಸಿಬ್ಬಂದಿಗಳ ವೇತನವನ್ನು ಗ್ರಾಮ ಪಂಚಾಯತಿ ನಿಧಿಯಿಂದ ಅಂದರೆ ಸ್ವಂತ ಸಂಪನ್ಮೂಲದಿಂದ ಪಾವತಿಸುವುದು, ಪ್ರತಿಯೊಂದು ಗ್ರಾಮ ಪಂಚಾಯತಿಯ ಕರ್ತವ್ಯವಾಗಿರುತ್ತದೆ. ಆದರೂ ರಾಜ್ಯದ ಹಲವಾರು ಗ್ರಾಮ ಪಂಚಾಯತಿಗಳಲ್ಲಿ ಸಂಪನ್ಮೂಲದ ಕೊರತೆಯಿಂದ ಸಮಯಕ್ಕೆ ಸರಿಯಾಗಿ ಸಿಬ್ಬಂದಿಗಳ ವೇತನ ಪಾವತಿಸದ ಕಾರಣ ಸರ್ಕಾರವು ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಅನುದಾನದಲ್ಲಿ ಭಾಗಶಃ ವೇತನಕ್ಕಾಗಿ ಪ್ರತ್ಯೇಕ ಅನುದಾನವನ್ನು ಬಿಡುಗಡೆ ಮಾಡುತ್ತಿದೆ.

ಪ್ರಸ್ತುತ ಗ್ರಾಮ ಪಂಚಾಯತಿ ನೌಕರರ ವೇತನಕ್ಕಾಗಿ 2021–22ನೇ ಸಾಲಿನಲ್ಲಿ ರೂ. 383.40 ಕೋಟಿಗಳನ್ನು ಸರ್ಕಾರದಿಂದ

| | | |
|---|---|---|
| | | ತ್ರೈಮಾಸಿಕವಾಗಿ 3 ಕಂತುಗಳಲ್ಲಿ ಬಿಡುಗಡೆ ಮಾಡಲಾಗಿದೆ. |
| (ಉ) | ರಾಜ್ಯದಲ್ಲಿನ ಸುಮಾರು 6000 ಗ್ರಾಮ ಪಂಚಾಯತ್‌ಗಳಿಂದ ಕುಡಿಯುವ ನೀರಿನ ಪೂರೈಕೆ ಮತ್ತು ಬೀದಿ ದೀಪಗಳಿಗೆ, ರಾಜ್ಯದ 5 ವಿದ್ಯುತ್ ಕಂಪನಿಗಳಿಗೆ ಅಂದಾಜು 4100 ಕೋಟಿ ರೂ.ಗಳಷ್ಟು ಬಿಲ್ ಪಾವತಿಸಬೇಕಾಗಿದ್ದು, ಒಂದು ವೇಳೆ ಈ ವರ್ಷದ ಡಿಸೆಂಬರ್ ಅಂತ್ಯದೊಳಗೆ ಬಿಲ್ಲುಗಳು ಪಾವತಿಯಾಗದಿದ್ದಲ್ಲಿ, ವಿದ್ಯುತ್ ಸಂಪರ್ಕ ಕಡಿತಗೊಳಿಸುವುದಾಗಿ ನೋಟೀಸ್ ಜಾರಿಯಾಗಿರುವುದು ನಿಜವೇ; ಹಾಗಿದ್ದಲ್ಲಿ, ಈ ಬಗ್ಗೆ ಕೈಗೊಂಡಿರುವ ಮುಂಜಾಗ್ರತ ಕ್ರಮಗಳು ಯಾವುವು; (ಸಂಪೂರ್ಣ ವಿವರ ನೀಡುವುದು) | ಹೌದು.<br><br>2021-22ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2515-00-198-1-07-300 ರಡಿಯಲ್ಲಿ ಗ್ರಾಮ ಪಂಚಾಯತಿಗಳಿಗೆ ಸಹಾಯ ಎಂಬ ಹೆಸರಿನಲ್ಲಿ ಒಟ್ಟು ರೂ.902.99,00,000/- ಗಳ ಅನುದಾನ ಒದಗಿಸಿದ್ದು, ಗ್ರಾಮ ಪಂಚಾಯತಿಗಳ ವಿದ್ಯುತ್ ಬಿಲ್ ಮೊತ್ತ ಪಾವತಿಸಲು ರೂ.391,79,40,000/- ಗಳ ಅನುದಾನ ಹಂಚಿಕೆ ಮಾಡಿದ್ದು, 4 ತ್ರೈಮಾಸಿಕ ಕಂತುಗಳಲ್ಲಿ ಬಿಡುಗಡೆ ಮಾಡಲು ಉದ್ದೇಶಿಸಲಾಗಿದ್ದು, ಅದರಲ್ಲಿ ಡಿಸೆಂಬರ್ 2021 ರ ಅಂತ್ಯದವರೆಗೆ ಗ್ರಾಮ ಪಂಚಾಯತಿಗಳ ವಿದ್ಯುತ್ ಬಿಲ್ ಪಾವತಿಗಾಗಿ 3 ತ್ರೈಮಾಸಿಕ ಕಂತುಗಳಲ್ಲಿ ರೂ. 295,60,87,211/- ಗಳನ್ನು ಬಿಡುಗಡೆ ಮಾಡಲಾಗಿದೆ. ಇನ್ನುಳಿದ ಒಂದು ತ್ರೈಮಾಸಿಕ ಕಂತಿನ ಅನುದಾನವನ್ನು ಫೆಬ್ರವರಿ-ಮಾರ್ಚ್ ತಿಂಗಳಿನಲ್ಲಿ ಬಿಡುಗಡೆ ಮಾಡಲಾಗುತ್ತದೆ.<br><br>ಈಗಾಗಲೇ 14/15ನೇ ಹಣಕಾಸು ಯೋಜನೆ ಹಾಗೂ ಗ್ರಾಮ ಪಂಚಾಯತ್ ಸ್ವಂತ ಸಂಪನ್ಮೂಲದಿಂದ ಕುಡಿಯುವ ನೀರು ಹಾಗೂ ಬೀದಿ ದೀಪ ಸ್ಥಾವರಗಳ ಬಾಕಿ ಇರುವ ವಿದ್ಯುತ್ ಬಿಲ್ಲನ್ನು ಪಾವತಿಸಲು ಗ್ರಾಮ ಪಂಚಾಯತಿಗಳಿಗೆ ನಿರ್ದೇಶನ ನೀಡಲಾಗಿದೆ. |
| (ಊ) | ರಾಜ್ಯದಲ್ಲಿ ಗ್ರಾಮ ಪಂಚಾಯತ್ ಮಟ್ಟದಲ್ಲಿ ಅಭಿವೃದ್ಧಿ ಕಾಮಗಾರಿಗಳಿಗೆ ನರೇಗಾ ಒಂದು ಆಶಾಕಿರಣವಾಗಿದ್ದು, ಈ ಕಾಮಗಾರಿಗಳ ಅನುಷ್ಠಾನದಲ್ಲಿ ಅಧಿಕಾರಿಗಳ ನಿರಾಸಕ್ತಿ ಮತ್ತು ಫಲಾನುಭವಿಗಳಿಗೆ ಹಣ ಬರುವುದು ವರ್ಷಾನುಗಟ್ಟಲೇ ವಿಳಂಬ, ಎಸ್.ಆರ್. ರೇಟ್ 4 ವರ್ಷದಿಂದ ಪರಿಷ್ಕರಣೆಯಾಗದೇ ಇರುವುದು, ಶೇಕಡಾ 60% ರ ಸಾಮಾಗ್ರಿ ವೆಚ್ಚ ಹಲವು ವರ್ಷಗಳಿಂದ ಬಾಕಿ ಎನ್ನುವ ಹಲವಾರು ಕಾರಣಗಳಿಂದ ಮತ್ತು ಕೇಂದ್ರ ಸರ್ಕಾರದಿಂದ ಮಹಾತ್ಮಾ ಗಾಂಧಿ ನರೇಗಾ ಯೋಜನೆ ಅಡಿ ಪಾವತಿಸಬೇಕಾಗಿರುವ ಸಾವಿರಾರು ಕೋಟಿ ರೂ.ಗಳು ಬಾಕಿ ಇರುವುದರಿಂದ, ಕಾಮಗಾರಿಗಳು ನೆನೆಗುದ್ದಿಗೆ ಬಿದ್ದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಇದರನ್ವಯ ಸರಿಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಸಾಮಗ್ರಿ ವೆಚ್ಚಕ್ಕೆ ಜಿಲ್ಲೆಗಳಿಂದ ಪಡೆದ ಅನುದಾನ ಕೋರಿಕೆಯಂತೆ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. ಕೂಲಿ ಪಾವತಿಗೆ ಸಂಬಂಧಿಸಿದಂತೆ ಅನುದಾನ ಬಿಡುಗಡೆ ಬಾಕಿ ಇರುತ್ತದೆ.<br><br>2021-22 ನೇ ಸಾಲಿಗೆ 2ನೇ ಕಂತಿನ ಕೂಲಿ ಅನುದಾನ ಬಿಡುಗಡೆ ಕೋರಿ ಹಣ ಬಳಕೆ ಪ್ರಮಾಣ ಪತ್ರವನ್ನು ಹಾಗೂ 2020-21 ನೇ ಸಾಲಿನ ಕ್ರೋಢೀಕೃತ ಆಡಿಟ್ ವರದಿಯನ್ನು ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯಕ್ಕೆ ಸಲ್ಲಿಸಿದ್ದು, ಪಾವತಿ ವಿಳಂಬತೆಯಿಂದ ಕೂಲಿ ಕಾರ್ಮಿಕರು ಸಂಕಷ್ಟದಲ್ಲಿರುವುದರಿಂದ ತ್ವರಿತವಾಗಿ ಅನುದಾನ ಬಿಡುಗಡೆ ಮಾಡಬೇಕೆಂದು ಕೇಂದ್ರ ಸರ್ಕಾರವನ್ನು ಕೋರಲಾಗಿದೆ. |

ಸಂಖ್ಯೆ: ಗ್ರಾಅಪ 464 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ವಿಧಾನ ಸಭೆ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1270 ಕ್ಕೆ ಅನುಬಂಧ -1

## ಕಳೆದ 3 ವರ್ಷಗಳಲ್ಲಿ ರಾಜ್ಯದ ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡಲಾದ ಶಾಸನಬದ್ಧ ಅನುದಾನದ ವಿವರ

(ರೂ.ಕೋಟಿಗಳಲ್ಲಿ)

| ಕ್ರ.ಸಂ | ಜಿಲ್ಲೆಗಳು | 2018-19 | 2019-20 | 2020-21 |
|---|---|---|---|---|
| 1 | ಬಾಗಲಕೋಟೆ | 27.85 | 24.26 | 25.09 |
| 2 | ಬಳ್ಳಾರಿ | 29.88 | 29.85 | 28.67 |
| 3 | ಬೆಳಗಾವಿ | 69.30 | 64.58 | 64.78 |
| 4 | ಬೆಂಗಳೂರು ನಗರ | 18.08 | 21.65 | 16.35 |
| 5 | ಬೆಂಗಳೂರು (ಗ್ರಾ) | 16.44 | 21.04 | 19.04 |
| 6 | ಬೀದರ್ | 30.69 | 28.37 | 28.35 |
| 7 | ಚಾಮರಾಜನಗರ | 22.23 | 21.82 | 21.70 |
| 8 | ಚಿಕ್ಕಬಳ್ಳಾಪುರ | 26.45 | 30.03 | 30.87 |
| 9 | ಚಿಕ್ಕಮಗಳೂರು | 30.15 | 28.60 | 28.69 |
| 10 | ಚಿತ್ರದುರ್ಗ | 31.20 | 30.55 | 31.34 |
| 11 | ದಕ್ಷಿಣ ಕನ್ನಡ | 28.09 | 24.74 | 24.76 |
| 12 | ದಾವಣಗೆರೆ | 33.30 | 28.38 | 31.78 |
| 13 | ಧಾರವಾಡ | 21.35 | 20.04 | 20.38 |
| 14 | ಗದಗ | 17.73 | 18.69 | 18.88 |
| 15 | ಹಾಸನ | 44.22 | 45.03 | 45.22 |
| 16 | ಹಾವೇರಿ | 32.19 | 29.06 | 29.16 |
| 17 | ಕಲಬುರಗಿ | 42.16 | 40.72 | 41.64 |
| 18 | ಕೊಡಗು | 13.46 | 12.24 | 12.25 |
| 19 | ಕೋಲಾರ | 28.70 | 30.91 | 31.98 |
| 20 | ಕೊಪ್ಪಳ | 24.12 | 25.79 | 25.74 |
| 21 | ಮಂಡ್ಯ | 37.91 | 39.68 | 39.92 |
| 22 | ಮೈಸೂರು | 40.49 | 44.74 | 43.85 |
| 23 | ರಾಯಚೂರು | 25.08 | 26.94 | 27.20 |
| 24 | ರಾಮನಗರ | 22.63 | 27.01 | 26.19 |
| 25 | ಶಿವಮೊಗ್ಗ | 37.12 | 33.90 | 33.68 |
| 26 | ತುಮಕೂರು | 52.33 | 60.04 | 60.19 |
| 27 | ಉಡುಪಿ | 17.49 | 16.49 | 16.61 |
| 28 | ಉತ್ತರ ಕನ್ನಡ | 27.85 | 25.54 | 25.99 |
| 29 | ವಿಜಯಾಪುರ | 33.45 | 31.86 | 31.83 |
| 30 | ಯಾದಗಿರಿ | 21.08 | 20.44 | 20.86 |
| ಒಟ್ಟು | | **902.99** | **902.99** | **902.99** |

ಅನುಬಂಧ-1

(ರೂ. ಲಕ್ಷಗಳಲ್ಲಿ)

| ಕ್ರ. ಸಂ | ಜಿಲ್ಲೆ | ಬಿಡುಗಡೆಯಾದ ಅನುದಾನದ ವಿವರ | | |
|---|---|---|---|---|
| | | 14ನೇ ಹಣಕಾಸು ಆಯೋಗ ಅನುದಾನ | | 15ನೇ ಹಣಕಾಸು ಆಯೋಗ ಅನುದಾನ |
| | | 2018-19 | 2019-20 | 2020-21 |
| 1 | ಬಾಗಲಕೋಟೆ | 6314.91 | 8526.06 | 10923.91 |
| 2 | ಬೆಂಗಳೂರು ನಗರ | 4344.82 | 5865.60 | 7103.93 |
| 3 | ಬೆಂಗಳೂರು ಗ್ರಾಮಾಂತರ | 3528.23 | 4763.08 | 5882.11 |
| 4 | ಬೆಳಗಾವಿ | 16218.25 | 21976.95 | 28074.18 |
| 5 | ಬಳ್ಳಾರಿ | 7285.21 | 11741.62 | 14682.10 |
| 6 | ಬೀದರ್ | 6114.42 | 8255.06 | 10561.92 |
| 7 | ವಿಜಯಪುರ | 7840.70 | 10796.02 | 13947.94 |
| 8 | ಚಾಮರಾಜನಗರ | 4210.46 | 5685.05 | 7478.59 |
| 9 | ಚಿಕ್ಕಬಳ್ಳಾಪುರ | 4781.50 | 6486.03 | 8792.01 |
| 10 | ಚಿಕ್ಕಮಗಳೂರು | 4669.83 | 6304.22 | 7999.26 |
| 11 | ಚಿತ್ರದುರ್ಗ | 6676.80 | 9026.10 | 11643.90 |
| 12 | ದಕ್ಷಿಣ ಕನ್ನಡ | 6496.22 | 8860.52 | 10949.88 |
| 13 | ದಾವಣಗೆರೆ | 6304.38 | 7162.61 | 9472.02 |
| 14 | ಧಾರವಾಡ | 3891.65 | 5253.65 | 6702.39 |
| 15 | ಗದಗ | 3434.68 | 4637.32 | 6409.31 |
| 16 | ಕಲಬುರಗಿ | 8781.39 | 12241.42 | 15704.03 |
| 17 | ಹಾಸನ | 7079.56 | 9826.50 | 13011.79 |
| 18 | ಹಾವೇರಿ | 5919.30 | 7990.34 | 10199.72 |
| 19 | ಕೊಡಗು | 2533.42 | 3420.66 | 4408.26 |
| 20 | ಕೋಲಾರ | 5162.23 | 7054.34 | 9141.73 |
| 21 | ಕೊಪ್ಪಳ | 5207.03 | 7087.55 | 9104.91 |
| 22 | ಮಂಡ್ಯ | 7116.67 | 9607.13 | 12424.72 |
| 23 | ಮೈಸೂರು | 8739.84 | 11798.87 | 15168.75 |
| 24 | ರಾಯಚೂರು | 6799.98 | 9243.23 | 11821.44 |
| 25 | ರಾಮನಗರ | 3854.82 | 5204.21 | 6709.57 |
| 26 | ಶಿವಮೊಗ್ಗ | 5784.03 | 7808.29 | 10022.12 |
| 27 | ತುಮಕೂರು | 10327.86 | 13856.53 | 17950.63 |
| 28 | ಉಡುಪಿ | 4555.40 | 6163.45 | 7917.12 |
| 29 | ಉತ್ತರ ಕನ್ನಡ | 5631.44 | 7604.07 | 9739.15 |
| 30 | ಯಾದಗಿರಿ | 4548.92 | 6166.63 | 7752.61 |
| | ಒಟ್ಟು | **184153.92** | **250413.12** | **321700.00** |

ಅನುಬಂಧ-3

(ರೂ. ಗಳಲ್ಲಿ)

| ಕ್ರ.ಸಂ | ಜಿಲ್ಲೆ | ನಿರ್ಬಂಧಿತ ಅನುದಾನ (ಶೇ.60) | ಮೂಲ ಅನುದಾನ (ಶೇ.40) | ಒಟ್ಟಾರೆ |
|---|---|---|---|---|
| 1 | ಬಾಗಲಕೋಟೆ | 413253933 | 275502622 | 688756555 |
| 2 | ಬಳ್ಳಾರಿ | 556545166 | 371030111 | 927575276 |
| 3 | ಬೆಳಗಾವಿ | 1062204673 | 708136448 | 1770341121 |
| 4 | ಬೆಂಗಳೂರು ನಗರ | 267906675 | 178604450 | 446511124 |
| 5 | ಬೆಂಗಳೂರು ಗ್ರಾಮಾಂತರ | 223670499 | 149113666 | 372784165 |
| 6 | ಬೀದರ್ | 399465362 | 266310241 | 665775603 |
| 7 | ಚಾಮರಾಜನಗರ | 284100432 | 189400288 | 473500721 |
| 8 | ಚಿಕ್ಕಬಳ್ಳಾಪುರ | 324313258 | 216208838 | 540522096 |
| 9 | ಚಿಕ್ಕಮಗಳೂರು | 304763584 | 203175723 | 507939307 |
| 10 | ಚಿತ್ರದುರ್ಗ | 437700055 | 291800036 | 729500091 |
| 11 | ದಕ್ಷಿಣ ಕನ್ನಡ | 405912524 | 270608349 | 676520873 |
| 12 | ದಾವಣಗೆರೆ | 347724774 | 231816516 | 579541291 |
| 13 | ಧಾರವಾಡ | 254741505 | 169827670 | 424569175 |
| 14 | ಗದಗ | 232977480 | 155318320 | 388295800 |
| 15 | ಹಾಸನ | 485680286 | 323786857 | 809467143 |
| 16 | ಹಾವೇರಿ | 385868655 | 257245770 | 643114425 |
| 17 | ಕಲಬುರಗಿ | 589402600 | 392935066 | 982337666 |
| 18 | ಕೊಡಗು | 167485101 | 111656734 | 279141834 |
| 19 | ಕೋಲಾರ | 346505839 | 231003893 | 577509732 |
| 20 | ಕೊಪ್ಪಳ | 344854531 | 229903021 | 574757552 |
| 21 | ಮಂಡ್ಯ | 468975027 | 312650018 | 781625045 |
| 22 | ಮೈಸೂರು | 575771400 | 383847600 | 959619000 |
| 23 | ರಾಯಚೂರು | 448059647 | 298706432 | 746766079 |
| 24 | ರಾಮನಗರ | 255091235 | 170060823 | 425152058 |
| 25 | ಶಿವಮೊಗ್ಗ | 382380951 | 254920634 | 637301585 |
| 26 | ತುಮಕೂರು | 678420084 | 452280056 | 1130700141 |
| 27 | ಉಡುಪಿ | 301045928 | 200697285 | 501743214 |
| 28 | ಉತ್ತರ ಕನ್ನಡ | 370846485 | 247230990 | 618077475 |
| 29 | ವಿಜಯಪುರ | 513966219.8 | 342644146.6 | 856610366.4 |
| 30 | ಯಾದಗಿರಿ | 293066094 | 195377396 | 488443490 |
| ಒಟ್ಟು | | **12122700000** | **8081800000** | **20204500000** |

ಅನುಬಂಧ-4

(ರೂ. ಲಕ್ಷಗಳಲ್ಲಿ)

| ಕ್ರ. ಸಂ | ಜಿಲ್ಲೆ | ಬಿಡುಗಡೆಯಾದ ಅನುದಾನದ ವಿವರ | | ಕಾರ್ಯಕ್ರಮಗಳು |
|---|---|---|---|---|
| | | 14ನೇ ಹಣಕಾಸು ಆಯೋಗ ಅನುದಾನ | 15ನೇ ಹಣಕಾಸು ಆಯೋಗ ಅನುದಾನ | |
| | | **2019-20** | **2020-21** | |
| 1 | ಬಾಗಲಕೋಟೆ | 8526.06 | 10923.91 | 1. ಮೂಲ ಅನುದಾನವನ್ನು ಗ್ರಾಮ ಪಂಚಾಯತಿಗಳು ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂ.ರಾಜ್ ಅಧಿನಿಯಮ 1993ರ ಪ್ರಕರಣ 58ರಲ್ಲಿ ನಿಗಧಿಪಡಿಸಿರುವಂತಹ ಕಾರ್ಯಗಳಿಗೆ ಯೋಜನೆ ತಯಾರಿಸಿ ವೆಚ್ಚ ಮಾಡುವುದು. ತಾಲ್ಲೂಕು ಪಂಚಾಯತಿಗಳು ಸದರಿ ಅಧಿನಿಯಮದ ಪ್ರಕರಣ 145ರಡಿಯಲ್ಲಿ ತಾಲ್ಲೂಕು ಪಂಚಾಯತಿಗಳಿಗೆ ವಹಿಸಿರುವ ಪ್ರಕಾರ್ಯಗಳಿಗೆ ಯೋಜನೆ ತಯಾರಿಸಿ ವೆಚ್ಚ ಮಾಡುವುದು. ಜಿಲ್ಲಾ ಪಂಚಾಯತಿಗಳು ಸದರಿ ಅಧಿನಿಯಮದ ಪ್ರಕರಣ 184ರಲ್ಲಿ ಜಿಲ್ಲಾ ಪಂಚಾಯತಿಗಳಿಗೆ ವಹಿಸಿರುವ ಪ್ರಕಾರ್ಯಗಳಿಗೆ ಯೋಜನೆಗಳನ್ನು ತಯಾರಿಸಿ ವೆಚ್ಚ ಮಾಡುವುದು. ಮೂಲ ಅನುದಾನವನ್ನು (ಅನಿರ್ಬಂಧಿತ) ಯಾವುದೇ ಕಾರಣಕ್ಕೂ ಸಂಬಳ ಪಾವತಿಸಲು ಅಥವಾ ಇತರೆ ಕಛೇರಿ ವೆಚ್ಚಕ್ಕಾಗಿ ಬಳಸಲು ಅವಕಾಶವಿರುವುದಿಲ್ಲ.<br><br>2. ಶೇ.60ರಷ್ಟು ನಿಗಧಿಪಡಿಸಲಾಗಿರುವಂತಹ ನಿರ್ಬಂಧಿತ ಅನುದಾನವನ್ನು ಗ್ರಾಮಾಂತರ ಪ್ರದೇಶದ ನೈರ್ಮಲ್ಯಕರಣ ಸೇವೆಗಳನ್ನು ಉತ್ತಮಪಡಿಸಲು ಹಾಗೂ ಬಯಲು ಬಹಿರ್ದೆಸೆ ಮುಕ್ತ ಸ್ಥಿತಿಯ ಸುಸ್ಥಿರತೆ ಕಾಯ್ದುಕೊಳ್ಳಲು, ಗ್ರಾಮಾಂತರ ಪ್ರದೇಶದ ಕುಡಿಯುವ ನೀರು ಸರಬರಾಜು, ಮಳೆ ನೀರು ಕೊಯ್ಲು ಮತ್ತು ನೀರು ಮರು ಬಳಕೆಗೆ ಸಂಬಂಧಿಸಿದಂತಹ ಕೆಲಸ ಕಾರ್ಯಗಳಿಗೆ ಬಳಕೆ ಮಾಡತಕ್ಕದ್ದು.<br><br>3.ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕಾರ ಶೇ.25ರಷ್ಟು ಅನುದಾನವನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಭಿವೃದ್ಧಿಗೆ ಮೀಸಲಿರಿಸತಕ್ಕದ್ದು |
| 2 | ಬೆಂಗಳೂರು ನಗರ | 5865.60 | 7103.93 | |
| 3 | ಬೆಂಗಳೂರು ಗ್ರಾಮಾಂತರ | 4763.08 | 5882.11 | |
| 4 | ಬೆಳಗಾವಿ | 21976.95 | 28074.18 | |
| 5 | ಬಳ್ಳಾರಿ | 11741.62 | 14682.10 | |
| 6 | ಬೀದರ್ | 8255.06 | 10561.92 | |
| 7 | ವಿಜಯಪುರ | 10796.02 | 13947.94 | |
| 8 | ಚಾಮರಾಜನಗರ | 5685.05 | 7478.59 | |
| 9 | ಚಿಕ್ಕಬಳ್ಳಾಪುರ | 6486.03 | 8792.01 | |
| 10 | ಚಿಕ್ಕಮಗಳೂರು | 6304.22 | 7999.26 | |
| 11 | ಚಿತ್ರದುರ್ಗ | 9026.10 | 11643.90 | |
| 12 | ದಕ್ಷಿಣ ಕನ್ನಡ | 8860.52 | 10949.88 | |
| 13 | ದಾವಣಗೆರೆ | 7162.61 | 9472.02 | |
| 14 | ಧಾರವಾಡ | 5253.65 | 6702.39 | |
| 15 | ಗದಗ | 4637.32 | 6409.31 | |
| 16 | ಕಲಬುರಗಿ | 12241.42 | 15704.03 | |
| 17 | ಹಾಸನ | 9826.50 | 13011.79 | |
| 18 | ಹಾವೇರಿ | 7990.34 | 10199.72 | |
| 19 | ಕೊಡಗು | 3420.66 | 4408.26 | |
| 20 | ಕೋಲಾರ | 7054.34 | 9141.73 | |
| 21 | ಕೊಪ್ಪಳ | 7087.55 | 9104.91 | |
| 22 | ಮಂಡ್ಯ | 9607.13 | 12424.72 | |
| 23 | ಮೈಸೂರು | 11798.87 | 15168.75 | |
| 24 | ರಾಯಚೂರು | 9243.23 | 11821.44 | |
| 25 | ರಾಮನಗರ | 5204.21 | 6709.57 | |
| 26 | ಶಿವಮೊಗ್ಗ | 7808.29 | 10022.12 | |
| 27 | ತುಮಕೂರು | 13856.53 | 17950.63 | |
| 28 | ಉಡುಪಿ | 6163.45 | 7917.12 | |
| 29 | ಉತ್ತರ ಕನ್ನಡ | 7604.07 | 9739.15 | |
| 30 | ಯಾದಗಿರಿ | 6166.63 | 7752.61 | |
| | ಒಟ್ಟು | **250413.12** | **321700.00** | |